# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1591
ಸದಸ್ಯರ ಹೆಸರು : ಶ್ರೀ ಎಸ್. ನಾಗರಾಜ್ (ಸಂದೇಶ ನಾಗರಾಜ್) (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸುವ ದಿನಾಂಕ : 24-09-2021.
ಉತ್ತರಿಸುವವರು : ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು.

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಚಾಮರಾಜ ನಗರ ಜಿಲ್ಲಾ ಪಂಚಾಯತ್ ವ್ಯಾಪ್ತಿಯ ಗ್ರಾಮ ಪಂಚಾಯಿತಿಗಳಲ್ಲಿ ಸೇವೆ ಸಲ್ಲಿಸುತ್ತಿರುವ ಬಿಲ್ ಕಲೆಕ್ಟರ್‌ಗಳು. ನೀರಗಂಟಿಗಳು, ಅಟೆಂಡರ್‌ಗಳ ಸಂಖ್ಯೆ ಎಷ್ಟು; ಇವರಿಗೆ ಕಳೆದ 7–8 ತಿಂಗಳಿಗೆ ಅನುದಾನದ ಕೊರತೆಯಿಂದ ವೇತನ ನೀಡದೇ ಈ ನೌಕರರಿಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಚಾಮರಾಜ ನಗರ ಜಿಲ್ಲಾ ಪಂಚಾಯತ್ ವ್ಯಾಪ್ತಿಯ ಗ್ರಾಮ ಪಂಚಾಯಿತಿಗಳಲ್ಲಿ ಸೇವೆ ಸಲ್ಲಿಸುತ್ತಿರುವ ಬಿಲ್ ಕಲೆಕ್ಟರ್‌ಗಳ ಸಂಖ್ಯೆ:129, ನೀರಗಂಟಿಗಳ ಸಂಖ್ಯೆ:777 ಅಟೆಂಡರ್‌ಗಳ ಸಂಖ್ಯೆ:116. ಇವರಿಗೆ ಕೆಲವು ಗ್ರಾಮ ಪಂಚಾಯತಿಗಳಲ್ಲಿ 7–8 ತಿಂಗಳಿಗೆ ವೇತನ ನೀಡದಿರುವುದು ಗಮನಕ್ಕೆ ಬಂದಿದೆ. |
| (ಆ) | ವಿವಿಧ ತೆರಿಗೆಗಳಿಂದ ಸಂಗ್ರಹವಾಗುವ ಹಣವನ್ನು ಜಲಜೀವನ ಮಿಷನ್ ಖಾತೆಗೆ ಪಾವತಿಸುತ್ತಿದ್ದು, ಇವರ ವೇತನ ನೀಡಿಕೆಗೆ ಅನುದಾನ ಬಿಡುಗಡೆ ಆಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಈ ತೆರಿಗೆಗಳಿಂದ ಸಂಗ್ರಹವಾಗುವ ಹಣದಲ್ಲಿ ವೇತನ ನೀಡಲು ಕ್ರಮ ತೆಗೆದುಕೊಳ್ಳಲಾಗುವುದೇ? | ಕರ್ನಾಟಕ ಗ್ರಾಮ ಸ್ವರಾಜ್ ಮತ್ತು ಪಂಚಾಯತ್ ರಾಜ್ ಅಧಿನಿಯಮ, 1993 ರ ಪ್ರಕರಣ 113 ರಂತೆ ಗ್ರಾಮ ಪಂಚಾಯತಿಯ ಸಿಬ್ಬಂದಿಗಳ ವೇತನವನ್ನು ಗ್ರಾಮ ಪಂಚಾಯತಿ ನಿಧಿಯಿಂದ ಅಂದರೆ ಸ್ವಂತ ಸಂಪನ್ಮೂಲದಿಂದ ಪಾವತಿಸುವುದು, ಪ್ರತಿಯೊಂದು ಗ್ರಾಮ ಪಂಚಾಯತಿಯ ಕರ್ತವ್ಯವಾಗಿರುತ್ತದೆ. ಆದರೂ ರಾಜ್ಯದ ಹಲವಾರು ಗ್ರಾಮ ಪಂಚಾಯತಿಗಳಲ್ಲಿ ಸಂಪನ್ಮೂಲದ ಕೊರತೆಯಿಂದ ಸಮಯಕ್ಕೆ ಸರಿಯಾಗಿ ಸಿಬ್ಬಂದಿಗಳ ವೇತನ ಪಾವತಿಸದ ಕಾರಣ ಸರ್ಕಾರವು ಗ್ರಾಮ ಪಂಚಾಯತಿಗಳಿಗೆ ಬಿಡುಗಡೆ ಮಾಡುವ ಅನುದಾನದಲ್ಲಿ ಭಾಗಶಃ ವೇತನಕ್ಕಾಗಿ ಪ್ರತ್ಯೇಕ ಅನುದಾನವನ್ನು ಬಿಡುಗಡೆ ಮಾಡುತ್ತಿದೆ.<br><br>ಪ್ರಸ್ತುತ ರಾಜ್ಯದ ಗ್ರಾಮ ಪಂಚಾಯತಿಗಳಲ್ಲಿ 1) ಬಿಲ್ ಕಲೆಕ್ಟರ್, 2) ಕ್ಲರ್ಕ್ ಕಂ ಡಾಟಾ ಎಂಟ್ರಿ ಆಪರೇಟರ್ / ಡಾಟಾ ಎಂಟ್ರಿ ಆಪರೇಟರ್, 3) ವಾಟರ್ ಆಪರೇಟರ್, 4) ಅಟೆಂಡೆಂಟ್ ಮತ್ತು 5) ಕ್ಲೀನರ್ಸ್ ಸೇರಿದಂತೆ ಸಿಬ್ಬಂದಿಗಳ ವೇತನಕ್ಕಾಗಿ ವಾರ್ಷಿಕವಾಗಿ ಒಟ್ಟು ರೂ.783.61 ಕೋಟಿ ಅನುದಾನದ ಅವಶ್ಯಕತೆ ಇದ್ದು, ಇದರಲ್ಲಿ ರೂ. 511.20 ಕೋಟಿಗಳನ್ನು ಸರ್ಕಾರದಿಂದ ತ್ರೈಮಾಸಿಕವಾಗಿ 4 ಕಂತುಗಳಲ್ಲಿ ಬಿಡುಗಡೆ ಮಾಡಲಾಗುತ್ತಿದೆ.<br><br>ವೇತನಕ್ಕಾಗಿ ಕೊರತೆಯಾಗುವ ರೂ.272.41 ಕೋಟಿಗಳಲ್ಲಿ ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಕಾರ್ಯಕ್ರಮದ ಸೇವೆ ನೀಡುವವರಿಗೆ ಸದರಿ ಯೋಜನೆಯಡಿ ರೂ. 61.50 ಕೋಟಿಗಳನ್ನು ವಾರ್ಷಿಕವಾಗಿ |

| | | |
|---|---|---|
| | | 2 ಕಂತುಗಳಲ್ಲಿ ಬಿಡುಗಡೆ ಮಾಡಲಾಗುತ್ತದೆ.<br><br>15ನೇ ಹಣಕಾಸು ಆಯೋಗದ ಅನುದಾನದಡಿಯಲ್ಲಿ ಕುಡಿಯುವ ನೀರು ನಿರ್ವಹಣೆ, ನೈರ್ಮಲ್ಯ ಕಾಪಾಡುವ ಕಾರ್ಯಕ್ರಮಗಳಿಗೆ ಅನುದಾನವನ್ನು ಮೀಸಲಿರಿಸಲಾಗಿದ್ದು, ಕುಡಿಯುವ ನೀರು ಸರಬರಾಜು ಮತ್ತು ಸ್ವಚ್ಛತೆ ಸೇವೆ ನೀಡುವವರಿಗೆ 15ನೇ ಹಣಕಾಸು ಆಯೋಗದ ಅನುದಾನದಡಿ ರೂ.160.90 ಕೋಟಿಗಳ ಅನುದಾನ ಮತ್ತು ಸ್ವಂತ ಸಂಪನ್ಮೂಲದಲ್ಲಿ 50.01 ಕೋಟಿಗಳನ್ನು ಗ್ರಾಮ ಪಂಚಾಯತಿಗಳು ಸಿಬ್ಬಂದಿಗಳ ವೇತನಕ್ಕಾಗಿ ಭರಿಸಲು ಅನುದಾನವನ್ನು ವರ್ಗಾವಣೆ ಮಾಡಿಕೊಂಡು ಸಿಬ್ಬಂದಿಗಳ ವೇತನ ಭರಿಸಲು ಕ್ರಮ ಕೈಗೊಳ್ಳುವಂತೆ ಗ್ರಾಮ ಪಂಚಾಯತಿಗಳಿಗೆ ದಿನಾಂಕ:25-11-2020 ರ ಸರ್ಕಾರದ ಆದೇಶದಲ್ಲಿ ನಿರ್ದೇಶನ ನೀಡಲಾಗಿದೆ. |

ಸಂ. ಗ್ರಾಅಪ 367 ಗ್ರಾಪಂಅ 2021

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು.

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು